ಕರ್ನಾಟಕ ವಿಧಾನ ಪರಿಷತ್ತು

1

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 864 |
| ಸದಸ್ಯರ ಹೆಸರು | : | ಶ್ರೀ ಶಾಂತಾರಾಮ್ ಬುಡ್ನ ಸಿದ್ದಿ (ನಾಮ ನಿರ್ದೇಶನ ಹೊಂದಿದವರು ) |
| ಉತ್ತರಿಸುವ ದಿನಾಂಕ | : | 20-12-2021 |
| ಉತ್ತರಿಸುವವರು | : | ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯ ಕೆಲವು ಬುಡಕಟ್ಟು ಜನರ ಹಾಡಿಗಳಲ್ಲಿ ಅವರಿಗೆ ಮನೆ ನಿರ್ಮಿಸಲು ಅರಣ್ಯ ಇಲಾಖೆಯಿಂದ ಅನುಮತಿ ಸಿಗುತ್ತಿಲ್ಲ ಎಂಬ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುಸೂಚಿತ ಬುಡಕಟ್ಟುಗಳ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ 2006 (2007)ರ 2) ಮತ್ತು ನಿಯಮಗಳು 2008 (ನಿಯಮಗಳು ತಿದ್ದುಪಡಿ 2012) ಅಧಿನಿಯಮದನ್ವಯ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಮಟ್ಟದ / ಉಪ ವಿಭಾಗ ಮಟ್ಟದ ಮತ್ತು ಗ್ರಾಮ ಮಟ್ಟದ ಅರಣ್ಯ ಹಕ್ಕು ಸಮಿತಿಗಳನ್ನು ರಚಿಸಲಾಗಿರುತ್ತದೆ. ಸದರಿ ಸಮಿತಿಗಳು ಬುಡಕಟ್ಟು ಜನರ ಅರಣ್ಯ ಹಕ್ಕು ಕುರಿತಂತೆ ಸ್ವೀಕೃತವಾಗುವ ಅರ್ಜಿಗಳನ್ನು ಪರಿಶೀಲನೆ ನಡೆಸಿ ವಿಲೇವಾರಿ ಮಾಡಲು ಕ್ರಮ ಕೈಗೊಳ್ಳುತ್ತವೆ. ಅಲ್ಲದೆ, ಅನುಸೂಚಿತ ಬುಡಕಟ್ಟುಗಳ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ )ಅಧಿನಿಯಮ, 2006ರ ಸೆಕ್ಷನ್ 3(1) ರಲ್ಲಿ ರಕ್ಷಿತ ಪ್ರದೇಶದ ಅಂಚಿನಲ್ಲಿರುವ ಅರಣ್ಯ ವಾಸಿ ಬುಡಕಟ್ಟು ಜನರ ವಾಸದ ಹಕ್ಕು ಮತ್ತು ಉಳುಮೆ ಹಕ್ಕನ್ನು ಮಾನ್ಯ ಮಾಡಲಾದ ಸ್ಥಳದಲ್ಲಿ ಉಳುಮೆ ಮಾಡಲು, ಮನೆಯನ್ನು ದುರಸ್ತಿ ಮಾಡಲು ಅಥವಾ ಹೊಸದಾಗಿ ಮನೆಯನ್ನು ಕಟ್ಟಲು ಅವರಿಗೆ ಹಕ್ಕು ಇರುವುದರಿಂದ ಹಕ್ಕು ಮಾನ್ಯ ಮಾಡಿದ ಪ್ರದೇಶದೊಳಗೆ ಅವರಿಗೆ ಮನೆಯನ್ನು ಕಟ್ಟಿಕೊಳ್ಳಲು ಅಥವಾ ಸರ್ಕಾರದ ಯೋಜನೆಯಲ್ಲಿ ಮನೆಯನ್ನು ಕಟ್ಟಿಕೊಡಲು ಅರಣ್ಯ ಇಲಾಖೆಯ ಅಭ್ಯಂತರವಿರುವುದಿಲ್ಲ.<br>ಮುಂದುವರೆದು, ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ವ್ಯಾಪ್ತಿಯಲ್ಲಿ ಬುಡಕಟ್ಟು ಜನರ ಹಾಡಿಗಳಲ್ಲಿ ಅವರಿಗೆ ಮನೆ ನಿರ್ಮಿಸಲು ಅರಣ್ಯ ಇಲಾಖೆಯಿಂದ ಅನುಮತಿ ನೀಡುವ ಕುರಿತಂತೆ ಪ್ರಸ್ತಾವನೆಗಳು ಸ್ವೀಕೃತವಾಗಿರುವುದಿಲ್ಲ. ಆದರೆ, ಕೊಡಗು ಜಿಲ್ಲೆಯ |
| ಆ) | ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ/ ತೆಗೆದುಕೊಳ್ಳುವ ಕ್ರಮಗಳೇನು? | |

| | | |
|---|---|---|
| | | ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶದ ವ್ಯಾಪ್ತಿಗೆ ಒಳಪಡುವ ಚೆನ್ನಯ್ಯನ ಕೋಟೆ, ಮಾಲ್ದಾರೆ, ಕೆ.ಬಾಡಗ, ನಿಟ್ಟೂರು, ದೇವರಪುರ, ತಿತಿಮತಿ ಮತ್ತು ನಾಲ್ಕೇರಿ ಹಾಡಿಗಳಲ್ಲಿ ಹಕ್ಕು ಪತ್ರ ಪಡೆದು ವಸತಿ ಹೊಂದಿಲ್ಲದೇ ಇರುವ ಫಲಾನುಭವಿಗಳಿಗೆ ವೈಯಕ್ತಿಕ ಅರಣ್ಯ ಹಕ್ಕು ಮಾನ್ಯ ಮಾಡಲಾದ 613 ವಸತಿ ರಹಿತ ಫಲಾನುಭವಿಗಳಿಗೆ ಹೊಸದಾಗಿ ವಾಸದ ಮನೆಗಳನ್ನು (Semi-permanent dwelling houses) ನಿರ್ಮಿಸಲು ಅನುಮತಿ ಕೋರಿ ಪ್ರಸ್ತಾವನೆಗಳು ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಅನುಸೂಚಿತ ಬುಡಕಟ್ಟುಗಳ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕಗಳನ್ನು ಮಾನ್ಯ ಮಾಡುವ) ಆಧಿನಿಯಮ 2006 (2007)ರ 2) ಮತ್ತು ನಿಯಮಗಳು 2008 (ನಿಯಮಗಳು ತಿದ್ದುಪಡಿ 2012) ಅಧಿನಿಯಮದನ್ವಯ ಈ ಕಛೇರಿಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಪ್ರಮುಅಸಂ (ವಜೀ)/ಬಿ2/ಸಿಆರ್-44/2019-20, ದಿನಾಂಕ: 13.08.2021 ರಲ್ಲಿ ವಸತಿ ಹೊಂದಿಲ್ಲದೇ ಇರುವ ಫಲಾನುಭವಿಗಳಿಗೆ ವೈಯಕ್ತಿಕ ಅರಣ್ಯ ಹಕ್ಕು ಮಾನ್ಯ ಮಾಡಲಾದ 613 ವಸತಿ ರಹಿತ ಫಲಾನುಭವಿಗಳಿಗೆ ಹೊಸದಾಗಿ ವಾಸದ ಮನೆಗಳನ್ನು (Semi-permanent dwelling houses) ನಿರ್ಮಿಸಲು ಅನುಮತಿ ನೀಡಲಾಗಿದೆ. ಪ್ರಸ್ತುತ ಇಂತಹ ಯಾವುದೇ ಪ್ರಸ್ತಾವನೆಗಳು ಇಲಾಖೆಯಲ್ಲಿ ಬಾಕಿ ಇರುವುದಿಲ್ಲ. |

ಸಂಖ್ಯೆ: **ಅಪಜೀ 240 ಎಫ್‌ಡಬ್ಲ್ಯೂಎಲ್ 2021**

(ಉಮೇಶ್ ವಿ.ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು